# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 708
ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ್‌ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 17-09-2021.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಇ-ಸ್ವತ್ತು ವಿತರಣೆಯಲ್ಲಿ ತಾಲ್ಲೂಕು ಪಂಚಾಯಿತಿಯ ಪಾತ್ರವೇನು; | ಇ-ಸ್ವತ್ತು ವಿತರಣೆಯಲ್ಲಿ ತಾಲ್ಲೂಕು ಪಂಚಾಯತಿಯ ಪಾತ್ರವಿರುವುದಿಲ್ಲ. |
| (ಆ) | ಸ್ಥಿರಾಸ್ತಿಗಳಿಗೆ ಸಂಬಂಧಿಸಿದಂತೆ ಖಾತೆಗಳನ್ನು ನಿರ್ವಹಿಸಲು ತಾಲ್ಲೂಕು ಪಂಚಾಯಿತಿಗೆ ಅಧಿಕಾರವಿದೆಯೇ; (ಇದ್ದಲ್ಲಿ ಸದರಿ ಕಾಯ್ದೆ/ಸುತ್ತೋಲೆಯ ಪ್ರತಿಯನ್ನು ನೀಡುವುದು) | ಸ್ಥಿರಾಸ್ಥಿಗಳಿಗೆ ಸಂಬಂಧಿಸಿದಂತೆ ತೆರಿಗೆ ನಿರ್ಧರಣೆ ಪಟ್ಟಿ (ನಮೂನೆ-9, 11ಎ ಮತ್ತು 11ಬಿ) ನಿರ್ವಹಿಸಲು ತಾಲ್ಲೂಕು ಪಂಚಾಯತಿಗೆ ಅಧಿಕಾರವಿರುವುದಿಲ್ಲ. |
| (ಇ) | ಸರ್ಕಾರಿ ಸುತ್ತೋಲೆ ಸಂಖ್ಯೆ: ಗ್ರಾಅಪ 126 ಗ್ರಾಪಂಅ 2003(ಭಾಗ-1), ದಿನಾಂಕ:28.01.2004 ರ ಪ್ರಕಾರ ಗ್ರಾಮ ಪಂಚಾಯಿತಿಗಳ ಸ್ಥಿರಾಸ್ತಿಗಳ ಖಾತೆ ನಿರ್ವಹಣೆಯಲ್ಲಿ ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿಗಳು ಹಸ್ತಕ್ಷೇಪ ನಡೆಸಿದರೆ ಶಿಸ್ತು ಕ್ರಮ ಕೈಗೊಳ್ಳುವುದಾಗಿ ತಿಳಿಸಲಾಗಿದೆಯೇ; ತಿಳಿಸಲಾಗಿದ್ದಲ್ಲಿ ಸುತ್ತೋಲೆಗೆ ವಿರುದ್ಧವಾಗಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ಮೇಲೆ ಸರ್ಕಾರ ಕೈಗೊಂಡ ಕ್ರಮವೇನು; ಕೈಗೊಳ್ಳದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಕ್ರಮ ಕೈಗೊಳ್ಳಲಾಗುವುದು; | ಸರ್ಕಾರಿ ಸುತ್ತೋಲೆ ಸಂಖ್ಯೆ: ಗ್ರಾಅಪ 126 ಗ್ರಾಪಂಅ 2003, ದಿನಾಂಕ:05.08.2003 ರಲ್ಲಿ ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತ್ ತೆರಿಗೆಗಳು ಮತ್ತು ಫೀಜುಗಳು) ನಿಯಮಗಳು, 1994 ರ ನಿಯಮ, 7 ರಿಂದ 11 ರಲ್ಲಿ ತಿಳಿಸಿರುವ ಗ್ರಾಮ ಪಂಚಾಯತಿಗಳು ಸ್ಥಿರಾಸ್ತಿಗಳಿಗೆ ಸಂಬಂಧಿಸಿದಂತೆ ನಿರ್ಧರಣಾ ಪಟ್ಟಿಯ ನಕಲನ್ನು ನೀಡಲು ಗ್ರಾಮ ಪಂಚಾಯತಿಗಳಿಗೆ ಪೂರ್ಣ ಅಧಿಕಾರವಿದೆ ಎಂದು ತಿಳಿಸಲಾಗಿದೆ.<br><br>ಈ ಹಿಂದೆ ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತಿಗಳ ಲೆಕ್ಕಪತ್ರಗಳು ಮತ್ತು ಬಜೆಟ್) ನಿಯಮಗಳು, 1995 ರ ನಿಯಮ 45 ರಲ್ಲಿ ಗ್ರಾಮ ಪಂಚಾಯತಿಯ ಹಕ್ಕು ಪರಿವರ್ತನಾ ವಹಿಗಳು (ಮ್ಯುಟೇಶನ್) ಪ್ರತಿಯು ಕಾರ್ಯನಿರ್ವಾಹಕ ಅಧಿಕಾರಿಯ ಸುಪರ್ದಿನಲ್ಲಿ ಇರಿಸಬೇಕೆಂದು ಉಪಬಂಧವಿದೆ.<br><br>ಪ್ರಸ್ತುತ ಇ-ಸ್ವತ್ತು ತಂತ್ರಾಂಶ ಜಾರಿಗೆ ಬಂದ ನಂತರ ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 25 ಅಮುಕಾ 2015, ದಿನಾಂಕ:06-10-2015 ರಲ್ಲಿ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಮತ್ತು ಕೋಲಾರ ಜಿಲ್ಲೆಗಳಲ್ಲಿ ಕಾನೂನುಬಾಹಿರವಾಗಿ ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-11ಬಿ ವಿತರಿಸಲಾಗಿರುವ ಪ್ರಕರಣಗಳು ಬೆಳಕಿಗೆ ಬಂದಿರುವುದರಿಂದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅಂತರ್ ರಾಷ್ಟ್ರೀಯ ವಿಮಾಣ ನಿಲ್ದಾಣ ಪ್ರಾಧಿಕಾರ, ರಾಮನಗರ ಚನ್ನಪಟ್ಟಣ ಪ್ರಾಧಿಕಾರ, ನೆಲಮಂಗಲ ಯೋಜನಾ ಪ್ರಾಧಿಕಾರ, ಮಾಗಡಿ ಸ್ಥಳೀಯ ಯೋಜನಾ ಪ್ರಾಧಿಕಾರ, ಹೊಸಕೋಟೆ ಸ್ಥಳೀಯ ಯೋಜನಾ ಪ್ರಾಧಿಕಾರ, ಆನೇಕಲ್ ಸ್ಥಳೀಯ ಯೋಜನಾ |

| | | |
|---|---|---|
| | | ಪ್ರಾಧಿಕಾರ, ಬೆಂಗಳೂರು- ಮೈಸೂರು ಮೂಲ ಸೌಕರ್ಯ ಕಾರಿಡಾರ್ ಪ್ರದೇಶದ ಯೋಜನಾ ಪ್ರಾಧಿಕಾರ ಮತ್ತು ಬೆಂಗಳೂರು ಸುತ್ತಲಿನ ಸ್ಥಳೀಯ ಯೋಜನಾ ಪ್ರಾಧಿಕಾರಿಗಳ ವ್ಯಾಪ್ತಿಯಲ್ಲಿರುವ ಪ್ರದೇಶಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳು ಹೊಸದಾಗಿ ನಮೂನೆ-9, 11ಎ ಮತ್ತು 11ಬಿ ನೀಡಬೇಕಾದರೆ ಇ-ಸ್ವತ್ತು ತಂತ್ರಾಂಶದ ಮೂಲಕ ಕಾರ್ಯನಿರ್ವಾಹಕ ಅಧಿಕಾರಿಯವರು ಅನುಮೋದನೆ ನೀಡಿದ ನಂತರ ನಮೂನೆ-9, 11ಎ ಮತ್ತು 11ಬಿ ವಿತರಿಸಲು ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ಕ್ರಮ ವಹಿಸುವಂತೆ ತಿಳಿಸಿದೆ. |
| (ಈ) | ತುಮಕೂರು ಜಿಲ್ಲೆಯ ಎಲ್ಲಾ ತಾಲ್ಲೂಕುಗಳು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ನಿಗಧಿತ ಕಾಲಮಿತಗಿಂತ ಹೆಚ್ಚು ಅವಧಿ ಕಳೆದರೂ, ಖಾತೆ ಮಾಡದ ಪ್ರಕರಣಗಳೆಷ್ಟು; ಅವಧಿ ಮುಗಿದರೂ ಖಾತೆ ಮಾಡದಿರಲು ಕಾರಣಗಳೇನು; (ಪ್ರತಿ ಪ್ರಕರಣಕ್ಕೂ ಪ್ರತ್ಯೇಕವಾಗಿ ಕಾರಣಗಳನ್ನು ನೀಡುವುದು) | ತುಮಕೂರು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ ವ್ಯಾಪ್ತಿಯಲ್ಲಿ ನಿಗಧಿತ ಕಾಲಮಿತಿಗಿಂತ ಹೆಚ್ಚು ಅವಧಿ ಕಳೆದರೂ ತೆರಿಗೆ ನಿರ್ಧರಣೆ ಪಟ್ಟಿ (ನಮೂನೆ-9, 11ಎ ಮತ್ತು 11ಬಿ) ಮಾಡದ ಪ್ರಕರಣಗಳು ಇರುವುದಿಲ್ಲ. |
| (ಉ) | ಕಾರವಿಲ್ಲವೆ ಇ-ಖಾತಾ ಅರ್ಜಿಗಳನ್ನು ತಡೆಹಿಡಿದ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆಯೇ; ಕೈಗೊಳ್ಳದೇ ಇದ್ದಲ್ಲಿ, ಯಾವ ಕಾಲಮಿತಿಯಲ್ಲಿ ಕ್ರಮ ಕೈಗೊಳ್ಳಲಾಗುವುದು? | ಅನ್ವಯಿಸುವುದಿಲ್ಲ. |

ಸಂ. ಗ್ರಾಅಪ 325 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.